ದೇ ಉಂಟಾಗುವುದೆಂದು ನನ್ನ ಅಭಿಪ್ರಾಯವು. ಇಂಥಾ ತನ್ನ ನಿಶ್ಚಯವನ್ನು ಧೃತರಾಷ್ಟ್ರನು ಕೇಳಿ ಇನ್ನು ಮೇಲಾದರೂ ಶ್ರೀಕೃಷ್ಣನನ್ನು ಶರಣಹೊಂದಿ ಪಾಂಡವರೊಡನೆ ಸಮಾಧಾನವನ್ನು ಮಾಡಿಕೊಳ್ಳಲಿ ಎಂಬ್ಬದಾಗಿ ಸಂಜಯರ ಅಭಿಪ್ರಾಯವೆಂದರಿಯಬೇಕು.

ಭಗವದ್ಭಕ್ತಿಯುಕ್ತಸ್ಯ ತತ್ಪ್ರಸಾದಾತ್ಮಬೋಧತಃ ।
ಸುಖಂಬಂಧವಿಮುಕ್ತಿಸ್ಸ್ಯಾದಿತಿ ಗೀತಾರ್ಥಸಂಗ್ರಹಃ ॥

ಭಗವದ್ಭಕ್ತಿಯುಕ್ತನಾದ ಪುರುಷನಿಗೆ ಭಗವದನುಗ್ರಹದಿಂದುಂಟಾದ ಆತ್ಮಜ್ಞಾನದಿಂದಲೆ ಸುಖವಾಗಿ ಬಂಧ ವಿಮೋಚನವುಂಟಾಗುವುದೆಂಬುವುದೆ ಶ್ರೀಮದ್ಗೀತಾರ್ಥಸಾರಸಂಗ್ರಹವು. ‖೭೮‖

ಈ ಅಧ್ಯಾಯಾರ್ಥಗಳನ್ನು ಸಂಗ್ರಹಿಸುವ
ಅದ್ವೈತಸಿದ್ಧಾಂತಿಗಳ ಸಂಗ್ರಹಶ್ಲೋಕವು.

ಮೂ॥ ಅಧ್ಯಾಯೈಸ್ತ್ರ್ಯಷ್ಟಸಪ್ತಾಧಿಕದಶಭಿರಭಿಪ್ರಾಯಯು
ಕ್ತೈಃ ಕ್ರಮೇಣತ್ಯಾಗಸ್ಸನ್ನ್ಯಾಸಪೂರ್ವಸ್ತ್ರಿವಿಧಮತಿಧೃ
ತಿಜ್ಞಾನಕರ್ತೃಕ್ರಿಯಾದಿಃ । ಬ್ರಹ್ಮಪ್ರಾಪ್ತೇರುಪಾಯಃ
ಪುನರಪಿಗದಿತೇಽಷ್ಟಾದಶೇಸಂಗ್ರಹಾರ್ಥಂ ಪಾರ್ಥಸ್ತೇ
ನೋದಿತಸ್ತನ್ನನುಸಮರಕೃತೇತ್ಯುಕ್ತಸಂದೇಹಜಾತಃ ‖೧೮‖

ತಾ॥ ಧ್ಯಾನಾಭ್ಯಾಸಿಯಾದವನಿಗೆ ಕರ್ಮಫಲತ್ಯಾಗ ವಾವಶ್ಯಕವೆಂತಲೂ ಸಾತ್ವಿಕರಾಜಸ ತಾಮಸ ಭೇದಗಳುಳ್ಳ ಬುದ್ಧಿಧೃತಿಜ್ಞಾನಕರ್ತೃಕ್ರಿಯಾದಿಗಳ ("ಬುದ್ಧೇರ್ಭೇದಂ ಧೃತೇಶ್ಚೈವ ‖(೧೮‖ ೨೯‖) ಇತ್ಯಾದಿಗಳಿಂದ ಹೇಳಲ್ಪಟ್ಟಿರುವುವು.) ವಿವರಗಳೂ ಬ್ರಹ್ಮೈಕ್ಯಕ್ಕೆ ಸಾಕ್ಷಾತ್ಸಾಧನವು ಇಂಥಾದ್ದೆಂತಲೂ ಹಿಂದಿನ ಅಧ್ಯಾಯಗಳಲ್ಲಿ ಕ್ರಮವಾಗಿ ಹೇಳಲ್ಪಟ್ಟ ಅರ್ಥಗಳನ್ನು ಪುನಶ್ಚ ಸಂಗ್ರಹವಾಗಿ ಉಪದೇಶಿಸಲೂ ಸರ್ವಸಂಶಯಗಳನ್ನು ಹೋಗಲಾಡಿಸಿಕೊಂಡಿರುವ ಅರ್ಜುನನು ಯುದ್ಧಸನ್ನದ್ಧನಾದನೆಂಬ ಅರ್ಥವು ಈ ಹದಿನೆಂಟನೆ ಅಧ್ಯಾಯದಲ್ಲಿ ಹೇಳಲ್ಪಟ್ಟಿರುವುದು. ... ‖೧೮‖

—*ಶ್ರೀಯಮುನಾಚಾರ್ಯರ ಸಂಗ್ರಹಶ್ಲೋಕವು*—

ಮೂ॥ ಈಶ್ವರೇಕರ್ತೃತಾಬುದ್ಧಿಸ್ಸತ್ವೋಪಾದೇಯತಾಂತಿ
ಮೇ । ಸ್ವಕರ್ಮಪರಿಣಾಮಶ್ಚ ಶಾಸ್ತ್ರಸಾರಾರ್ಥ ಉಚ್ಯತೇ ‖೨೨

ತಾ॥ ಈ ಅಧ್ಯಾಯದಲ್ಲಿ ಈಶ್ವರನಿಗೇನೆ ಕರ್ತೃತ್ವವೆಂತಲೂ ಸತ್ವಗುಣವು ಅವಶ್ಯಸ್ವೀಕಾರ್ಯವೆಂತಲೂ ತನ್ನ ಕರ್ಮಾನುಷ್ಠಾನಗಳ ಪರಿಣಾಮಪ್ರಕಾರಗಳೂ ಶಾಸ್ತ್ರಸಾರಾರ್ಥವೂ ಹೇಳಲ್ಪಟ್ಟಿರುವುದು ೨೨॥

ಮೂ ॥ ಕರ್ಮಯೋಗಸ್ತಪಸ್ತೀರ್ಥದಾನಯಜ್ಞಾದಿಸೇವನಂ । ಜ್ಞಾನಯೋಗೋಜಿತಸ್ವಾಂತೈಃಪರಿಶುದ್ಧಾತ್ಮನಿಸ್ಥಿತಿಃ ॥ ... ... ॥೨೩॥

ತಾ ॥ ತಪಸ್ಸಿನ ಅನುಷ್ಠಾನವೂ ತೀರ್ಥಸ್ನಾನಗಳನ್ನು ಮಾಡುವಿಕೆಯೂ ದಾನಗಳನ್ನು ಮಾಡುವಿಕೆಯೂ ಯಜ್ಞಾದಿಗಳ ಅನುಷ್ಠಾನವೂ ಇವೇ ಮೊದಲಾದವುಗಳು ಕರ್ಮಯೋಗಗಳು. ಅನ್ತಃಕರಣವನ್ನು ನಿಗ್ರಹಿಸಿ ಪರಿಶುದ್ಧಾತ್ಮ ಸ್ವರೂಪದಲ್ಲಿ ನಿಲ್ಲಿಸುವಿಕೆಯು ಜ್ಞಾನ ಯೋಗವು ॥ ॥೨೩॥

ಮೂ ॥ ಭಕ್ತಿಯೋಗಃಪರೈಕಾನ್ತ್ಯಪ್ರೀತ್ಯಾಧ್ಯಾನಾದಿಷುಸ್ಥಿತಿಃ । ತ್ರಯಾಣಾಮಪಿಯೋಗಾನಾಂತ್ರಿಭಿರನ್ಯೋನ್ಯಸಂಗಮಃ ॥೨೪॥ ನಿತ್ಯನೈಮಿತ್ತಿಕಾನಾಂಚಪರಾರಾಧನರೂಪಿಣಾಂ । ಆತ್ಮದೃಷ್ಟೇಸ್ತ್ರಯೋಪ್ಯೇತೆಯೋಗದ್ವಾರೇಣಸಾಧಕಾಃ ॥ ... ॥೨೫॥

ತಾ ॥ ಅತ್ಯಂತವಾದ ಭಗವತ್ಪ್ರೇಮೆಯೊಡನೆ ಇತರವಿಷಯಗಳಲ್ಲಿ ವ್ಯಾಪಿಸದ ಮನಸ್ಸಿನಿಂದ ಧ್ಯಾನಾದಿಗಳನ್ನು ಮಾಡುವಿಕೆಯು ಭಕ್ತಿಯೋಗವು. ಕರ್ಮಯೋಗಗಳಿಗೂ ಪರಮಾತ್ಮಾ ರಾಧನರೂಪಗಳಾದ ನಿತ್ಯನೈಮಿತ್ತಿಕ ಕರ್ಮಗಳಿಗೂ ಪರಸ್ಪರ ಸಂಬಂಧವು ಯಾವಾಗಲೂ ಉಂಟಾಗಿರುವುದು. ಪರ ಭಕ್ತಿದ್ವಾರಕವಾದ ಆತ್ಮದರ್ಶನಕ್ಕೆ ಯೋಗ ದ್ವಾರಾಕರ್ಮಜ್ಞಾನ ಭಕ್ತಿಯೋಗ ಗಳು ಸಾಧಕಗಳಾಗಿರುವುವು. ॥ ॥೨೪॥೨೫॥

ಮೂ ॥ ನಿರಸ್ತನಿಖಿಲಾಜ್ಞಾನೋದೃಷ್ಟ್ವಾತ್ಮಾನಂಪರಾನುಗಂ । ಪ್ರತಿಲಭ್ಯಪರಾಂಭಕ್ತಿಂತಯೈವಾಪ್ನೋತಿತತ್ಪದಂ ॥ ... ... ॥೨೬॥

ತಾ ॥ ಪುಣ್ಯವಿಶೇಷಗಳಿಂದ ಉಪಾಯವಿರೋಧಿಗಳಾದ ಪಾಪ

ಗಳನ್ನು ನಾಶಪಡಿಸಿಕೊಂಡ ಅಧಿಕಾರಿಯು ಹಿಂದೆಹೇಳಿರುವ ಪ್ರಕಾರದಿಂದ ಪರಮಾತ್ಮ ಶೇಷ ಭೂತನಾದ ಆತ್ಮವನ್ನು ಸಾಕ್ಷಾತ್ಕರಿಸಿ ಪರಮಾತ್ಮ ಪ್ರಕಾಶದಿಂದ ಪರಭಕ್ತಿಯನ್ನು ಹೊಂದಿ ಪರಮಭಕ್ತಿರೂಪವನ್ನು ಹೊಂದಿರುವ ಅದರಿಂದಲೆ ಆಪರಮಾತ್ಮ ಸ್ಥಾನವನ್ನು ಹೊಂದುವನು . ‖ ‖೧೬‖

ಮೂ‖ ಭಕ್ತಿಯೋಗಸ್ತದರ್ಥೀಚೇತ್ಸಮಗ್ರೈಶ್ವರ್ಯಸಾಧನಂ| ಆತ್ಮಾರ್ಥೀಚೇತ್ತ್ರಯೋಪ್ಯೇತೆ ತತ್ಕೈವಲ್ಯಸ್ಯಸಾಧಕಾಃ ‖ ... ... ‖೨೨‖

ತಾ‖ ಭಕ್ತಿಯೋಗವು ಐಶ್ವರ್ಯಾಪೇಕ್ಷಿಗಳಿಗೆ ಅಂಥಾ ಸಮಗ್ರೈಶ್ವರ್ಯಕ್ಕೂ, ಆತ್ಮಾನುಭವಾಪೇಕ್ಷಿಗಳಿಗೆ ಈ ಕರ್ಮಜ್ಞಾನ ಭಕ್ತಿಗಳೆಂಬೀಮೂರೂ ಆ ಆತ್ಮಾನುಭವರೂಪವಾದ ಮೋಕ್ಷಕ್ಕೂ ಸಾಧನಗಳಾಗಿರುವುವು. ... ... ... ‖೨೨‖

ಮೂ‖ ಐಕಾಂತ್ಯಂಭಗವತ್ಯೇಷಾಂ ಸಮಾನಮಧಿಕಾರಿಣಾಂ | ಯಾವತ್ಪ್ರಾಪ್ತಿಪರಾರ್ಥೀಚೇತ್ತದೇವಾನಂತ್ಯಮಶ್ನುತೆ ‖ ... ... ‖೨೪‖

ತಾ‖ ಈ ಸರ್ವಾಧಿಕಾರಿಗಳಿಗೂ ಪರಮಾತ್ಮನಲ್ಲಿ ದೇವತಾಂತರ ಭಜನವಿಲ್ಲದಿರುವಿಕೆ ಎಂಬ ಐಕಾಂತ್ಯವು ಸಮಾನವಾಗಿರುವುದು. ಪ್ರಾಪ್ತಿಪರ್ಯಂತವಾಗಿ ಪರಮಾತ್ಮಾನುಭವವನ್ನಪೇಕ್ಷಿಸುವಂತವನಿಗೆ ಸಾಕ್ಷಾನ್ಮೋಕ್ಷವೆ ಉಂಟಾಗುವುದು. ... ‖೨೪‖

ಮೂ‖ ಜ್ಞಾನೀತುಪರಮೈಕಾಂತೀತದಾಯತ್ತಾತ್ಮಜೀವನಃ । ತತ್ಸಂಶ್ಲೇಷವಿಯೋಗೈಕಸುಖದುಃಖಸ್ತದೇಕಧೀಃ‖ ೨೯ ‖ ಭಗವದ್ಧ್ಯಾನಯೋಗೋಕ್ತಿವಂದನಸ್ತುತಿಕೀರ್ತನೈಃ |ಲಬ್ಧಾತ್ಮಾತದ್ಗತಪ್ರಾಣಮನೋಬುದ್ಧೀಂದ್ರಿಯಕ್ರಿಯಃ ‖ ೩೦ ‖ ನಿಜಕರ್ಮಾದಿಭಕ್ತ್ಯಂತಂಕುರ್ಯಾತ್ಪ್ರೀತ್ಯೈವಕಾರಿತಃ| ಉಪಾಯತಾಂಪರಿತ್ಯಜ್ಯನ್ಯಸೇದ್ದೇವೇತುತಾಮಭೀಃ ‖ ... ... ‖೩೧‖

ತಾ॥ ಅನನ್ಯ ಪ್ರಯೋಜನನಾಗಿರುವ ಪರಮೈಕಾಂತಿಯಾದ ಜ್ಞಾನಿಯು ಪರಮಾತ್ಮಾಧೀನವಾದ ಜೀವಿತವುಳ್ಳವನಾಗಿ ಆ ಪರಮಾತ್ಮ ಸಂಶ್ಲೇಷದಲ್ಲಿ ಸುಖವನ್ನೂ ಅವನ ವಿಶ್ಲೇಷದಲ್ಲಿ ದುಃಖವನ್ನೂ ಹೊಂದಿದವನಾಗಿ ಪರಮಾತ್ಮನಲ್ಲಿಯೆ ನಿಲ್ಲಿಸಲ್ಪಟ್ಟ ಚಿತ್ತವುಳ್ಳವನಾಗಿ ಭಗವಂತನನ್ನು ಧ್ಯಾನದಲ್ಲಿ ನೋಡುವಿಕೆಯಿಂದಲೂ ಭಗವತ್ಸ್ವರೂಪವನ್ನು ಅಪೇಕ್ಷಿಸಿದವರಿಗೆ ಉಪದೇಶಿಸುವಿಕೆಯಿಂದಲೂ ಪರಮಾತ್ಮನ ವಂದನ ಸ್ತೋತ್ರ ಕೀರ್ತನಗಳಿಂದಲೂ ಆತ್ಮಲಾಭವುಳ್ಳವನಾಗಿ ಪ್ರಾಣಮನೋಬುದ್ಧೀಂದ್ರಿಯ ಕ್ರಿಯೆಗಳನ್ನು ಪರಮಾತ್ಮಾಧೀನವನ್ನಾಗಿ ಮಾಡಿ ನಿತ್ಯಕರ್ಮಾದಿ ಭಕ್ತಿಪರ್ಯಂತವಾದ ಸಮಸ್ತವನ್ನೂ ಪ್ರೀತಿಪ್ರೇರಿತನಾಗಿ ಮಾಡಬೇಕು. ಅವುಗಳಲ್ಲಿ ಉಪಾಯತ್ವಬುದ್ಧಿಯನ್ನು ತ್ಯಾಗಮಾಡಬೇಕು. ಪರಮಾತ್ಮನೇ ಮುಖ್ಯೋಪಾಯನೆಂದು ತಿಳಿದು ನಿರ್ಭಯನಾಗಿರಬೇಕು. ... ॥೨೯॥೩೦॥೩೦॥

ಮೂ॥ ಏಕಾಂತಾತ್ಯಂತದಾಸ್ಯೈಕರತಿಸ್ತತ್ಪದಮಾಪ್ನು
ಯಾತ್ । ತತ್ಪ್ರಧಾನಮಿದಂ ಶಾಸ್ತ್ರಮಿತಿಗೀತಾರ್ಥ
ಸಂಗ್ರಹಃ ॥ ... ... ॥೩೨॥

ತಾ॥ ದೇವತಾಂತರ ಪ್ರಯೋಜನಾಂತರಗಳಲ್ಲಿ ಅಪೇಕ್ಷೆಯಿಲ್ಲದವನಾಗಿ ಭಗವದ್ದಾಸ್ಯವನ್ನೇ ಅಪೇಕ್ಷಿಸುವಂತವನು ಪರಮಾತ್ಮ ಸ್ಥಾನವನ್ನು ಹೊಂದುವನು. ಈ ವಿಷಯವನ್ನೇ ಶ್ರೀಮದ್ಗೀತಾಶಾಸ್ತ್ರವು ಮುಖ್ಯವಾಗಿ ಪ್ರತಿಪಾದಿಸುವುದಲ್ಲದೆ ಶಂಕರಾದಿಗಳಿಂದ ಹೇಳಲ್ಪಡುವ ಭವದಭಿಪ್ರಾಯ ವಿರುದ್ಧವಾದ ಸರ್ವಕರ್ಮಸನ್ಯಾಸಾದಿಗಳನ್ನು ಮುಖ್ಯಾರ್ಥಗಳೆಂದು ಪ್ರತಿಪಾದಿಸಲಾರದು. ... ॥೩೦॥

ಶ್ರೀಮದ್ಯಾಮುನ ಮುನಯೇನಮಃ.

---

ಶ್ರೀಮದ್ವೇದಾಂತ ಮಹಾದೇಶಿಕ ಸ್ವಾಮಿಗಳಿಂದ ಅನುಗ್ರಹಿಸಲ್ಪಟ್ಟ ಈ ಅಧ್ಯಾಯ ಸಂಗ್ರಹ ಗಾಥೆಯು.

ಮೂ॥ ಶತ್ತುವಪೇಡುನೇಕರುಮುನ್ನಾನುಕನ್ದವೈಯಮ್,
ಶತ್ತುವಮುಳ್ಳದುತರ್ನ್ದ ಕುರಿಕೊಳ್ಳವಕೈಶೆಯ್‌ದನವುಮ್,

ಶತ್ತುವನಕ್ಕಿರಿಶೈಕ್ಕಪ್ಪಯನುಮ್ ಶರಣಾಗತಿಯುಮ್, ಶತ್ತು
ವಮೋತರುವಾನುರೈತ್ತಾನ್ ತನಿಪಾರ್ತ್ತನುಕ್ಕೇ ॥೧೯॥

ಟೀ॥ ಇನ್ನು ಮುಂದೆ “ ಈಶ್ವರೇಕರ್ತೃತಾಬುದ್ಧಿಸ್ಸತ್ತೋಪಾದೇಯತಾಂತಿಮೇ! ಸ್ವಕರ್ಮಪರಿಣಾಮಶ್ಚ ಶಾಸ್ತ್ರಸಾರಾರ್ಥ ಉಚ್ಯತೆ ,, ಎಂಬ ಸಂಗ್ರಹಶ್ಲೋಕದಂತೆ ಈ ಅಷ್ಟಾದಶಾಧ್ಯಾಯಾರ್ಥಗಳನ್ನು ಒಂದು ಶ್ಲೋಕದಿಂದ ಸಂಗ್ರಹಿಸುತ್ತಾರೆ. ಶತ್ತುವಮೋ-ಸತ್ತ್ವಗುಣವನ್ನೇ, ತರುವಾನ್-ಕೊಡುವಂತವನು, “ ಮಹಾನ್ಪ್ರಭುರ್ವೈ ಪುರುಷಸ್ಸತ್ತ್ವಸ್ಯೈಷ ಪ್ರವರ್ತಕಃ ,, ಎಂಬುವಂತೆ ಸತ್ವಗುಣಪ್ರವರ್ತಕನಾದ ಪರಮಪುರುಷನೆಂದರ್ಥವು. ಶತ್ತುವ-ಸತ್ವಪ್ರಯುಕ್ತವಾದ, ವೀಡ ಡೈ-ತ್ಯಾಗವನ್ನುಂಟಾಗಿರುವ,ಸಾತ್ವಿಕತ್ಯಾಗ ಘಟಿತವಾದ ಎಂದರ್ಥವು ನಕ್ಕರುಮಂ-ಒಳ್ಳೇಕರ್ಮವನ್ನು, ತಾನ್-ತಾನೆ, ಉಕನ್ದವೈಯುಮ್-ಅಪೇಕ್ಷಿಸಿದ ಪ್ರಕಾರವನ್ನೂ; ಸಾತ್ವಿಕತ್ಯಾಗದಿಂದ ಕೂಡಿರುವಕರ್ಮವು ತನಗೆ ಅತ್ಯಂತ ಪ್ರಿಯವಾಗಿರುವುದರಿಂದ ಸಾತ್ವಿಕತ್ಯಾಗಕ್ಕೆಅವಶ್ಯ ಕರ್ತವ್ಯತೆಯನ್ನೂ ಎಂದರ್ಥವು. ಇದರಿಂದ “ ಈಶ್ವರೆ ಕರ್ತೃತಾಬುದ್ಧಿಯು ,, ಹೇಳಲ್ಪಟ್ಟಿತು. ಶತ್ತುವ ಮುಳ್ಳದು-ಸತ್ವಗುಣವುಳ್ಳ ವಾಪಾರವನ್ನು, ತಾನ್ – ಅನುಷ್ಠಾತಾ ಅದ ತಾನು, ಕುರಿಕ್ಕೊಳ್ವಕ್ಕೆ-ಲಕ್ಷ್ಯವಾಗಿ ಸ್ವೀಕರಿಸುವಂತೆ, ಶೆಯ್ದನವುಮ್- ಮಾಡಲ್ಪಡುವ ವ್ಯಾಪಾರವನ್ನೂ; ಶಾಸ್ತ್ರಾರ್ಥಾಧಿಕಾರಿಯಾದ ತಾನು ತಾಮಸವ್ಯಾಪಾರಗಳನ್ನು ಬಿಟ್ಟು ಸಾತ್ವಿಕ ವ್ಯಾಪಾರವನ್ನು ಸ್ವೀಕರಿಸುವಂತೆ ಪರಸ್ಪರ ವಿಲಕ್ಷಣಗಳಾದ ಗುಣತ್ರಯಕಾರ್ಯ ಭೂತವ್ಯಾಪಾರಗಳನ್ನೂ ಎಂದರ್ಥವು. ಶತ್ತುವ-ಸತ್ವಗುಣಮೂಲಕಗಳಾದ, ನಲ್-ಶ್ರೇಷ್ಠಗಳಾದ, ಕಿರಿಶೈ-ಕ್ರಿಯೆಗಳ, ಪಯನುಮ್-ಫಲಗಳನ್ನೂ; ಪರಮಪುರುಷಾರಾಧನ ರೂಪವಾಗಿ ಅನುಷ್ಠಿಸಲ್ಪಡುವ ತನ್ನ ವರ್ಣಾಶ್ರಮಧರ್ಮಗಳು ಪರಮ ಪುರುಷ ಪ್ರಾಪ್ತಿ ಪರ್ಯಂತವಾಗಿ ಪರಿಣಮಿಸುವ ಪ್ರಕಾರವನ್ನೂ ಎಂದರ್ಥವು. ಶರಣಾಗತಿಯುಮ್-ಚರಮಶ್ಲೋಕ ಪ್ರತಿಪಾದ್ಯವಾಗಿರುವ ಅಕಿಂಚನಾಧಿಕಾರಿಯಿಂದ ಅನುಷ್ಠಿಸಲ್ಪಡುವ ಶರಣಾಗತಿಯನ್ನೂ; ಇದರಿಂದ ಸಂಗ್ರಹ ಶ್ಲೋಕದಲ್ಲಿರುವ ಶಾಸ್ತ್ರಸಾರಾರ್ಥವೆಂಬ ಪದವನ್ನು ಶರಣಾಗತಿ ಪರವಾಗಿ ವಿವರಿಸಿರುವಂತೆ ತಿಳಿಯ